CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೦೫ (ಮಾರ್ಗಶಿರ ೩, ಶಕ ವರ್ಷ ೧೯೨೭) | ಸಂಚಿಕೆ ೪೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-06ನೇ ಸಾಲಿನ ದ್ವಿತೀಯ ತ್ರೈಮಾಸಿಕ ಕಂತಿನ ಶಾಸನಬದ್ಧ ಅನುದಾನವನ್ನು ರಾಜ್ಯದ ಎಲ್ಲಾ ಗ್ರಾಮಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 773:ವೆಚ್ಚ-6:2005, ದಿ:9.5.2005.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 237 ಗ್ರಾಪಂಅ 2005, ದಿನಾಂಕ:17.5.2005.
3. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1520 ವೆಚ್ಚ 6/2005, ದಿ:24.8.2005.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿ (1)ರಲ್ಲಿ ಆರ್ಥಿಕ ಇಲಾಖೆಯು ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಬಿಡುಗಡೆ ಮಾಡಲು 2005-06ನೇ ಸಾಲಿನ ಲೆಕ್ಕಶೀರ್ಷಿಕೆ "2515-00-198-1-07 (ಯೋಜನೆ)" ಅಡಿಯಲ್ಲಿ ಒದಗಿಸಿರುವ ಒಟ್ಟಾರೆ ಅನುದಾನದ ಮೊತ್ತದ 1/4 ಭಾಗ ಅಂದರೆ ಪ್ರತಿ ಗ್ರಾಮ ಪಂಚಾಯತಿಗೆ ರೂ.1.25 ಲಕ್ಷಗಳಂತೆ ಒಟ್ಟು ರೂ.70.65 ಕೋಟಿಗಳನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿದ್ದು, ಅದನ್ನು ಉಲ್ಲೇಖ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಪ್ರಸ್ತಾಪಿತ ಮೊತ್ತವನ್ನು ಗ್ರಾಮಪಂಚಾಯ್ತಿಗಳಿಗೆ ಮೊದಲ ತ್ರೈಮಾಸಿಕ (ಏಪ್ರಿಲ್, ಮೇ, ಜೂನ್) ಕಂತಿನ ಬಾಬ್ತಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಉಲ್ಲೇಖ (3)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ರಾಜ್ಯದ ಎಲ್ಲಾ ಗ್ರಾಮ ಪಂಚಾಯ್ತಿಗಳಿಗೆ ಶಾಸನಬದ್ಧ ಅನುದಾನವನ್ನು 2005-06ನೇ ಸಾಲಿಗೆ ಎರಡನೇ ಕಂತಾಗಿ ರೂ.70.65 ಕೋಟಿ ರೂ.ಗಳನ್ನು ಬಿಡುಗಡೆ ಮಾಡಿರುತ್ತದೆ. ಈ ಮೊತ್ತವನ್ನು 2005-06ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಾಗಿ (ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್) ರಾಜ್ಯದ ಎಲ್ಲಾ ಗ್ರಾಮಪಂಚಾಯತಿಗಳಿಗೆ ತಲಾ ರೂ.1.25 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 237 ಗ್ರಾಪಂಅ 2005, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ 2005-06ನೇ ಸಾಲಿನ ದ್ವಿತೀಯ ತ್ರೈಮಾಸಿಕ ಕಂತು ಒಟ್ಟು ರೂ.70.65 ಕೋಟಿಗಳನ್ನು (ರೂ.ಎಪ್ಪತ್ತು ಕೋಟಿ ಅರವತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2515-00-198-1-07 (ಯೋಜನೆ)" ಅಡಿಯಲ್ಲಿ ಭರಿಸತಕ್ಕದ್ದು. ಹಾಗೂ ಈ ಅನುದಾನದ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ಫೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ರಾಜದೂತ್ ಕಾಂಪ್ಲೆಕ್ಸ್, ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಪ್ರತಿ ಗ್ರಾಮಪಂಚಾಯಿತಿಗೆ ರೂ.1.25 ಲಕ್ಷಗಳನ್ನು (ರೂ. ಒಂದು ಲಕ್ಷದ ಇಪ್ಪತ್ತೈದು ಸಾವಿರಗಳು ಮಾತ್ರ) ಗ್ರಾಮಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದೆ.

ಈಗ ಬಿಡುಗಡೆಯಾದ ಹಣವನ್ನು ಗ್ರಾಮಪಂಚಾಯತಿಗಳು ಉದ್ದೇಶಿತ ಕಾರ್ಯಕ್ರಮಗಳಿಗೆ ತಾವು ತಯಾರಿಸಿದ ಆಯವ್ಯಯದ ಆಧಾರದ ಮೇಲೆ ವೆಚ್ಚ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1520: ವೆಚ್ಚ-6:2005, ದಿನಾಂಕ:24.8.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶಾಮಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1505

**PERSONNEL AND ADMINISTRATIVE REFORMS SECRETARIAT**
**No. DPAR 535 SAS 2005, Bangalore, Dated: 27th October 2005**
**OFFICIAL MEMORANDUM**

The Office Memorandum No.F.No.1(5) 2005-E-II(B) 746 of Government of India, Ministry of Finance Department of Expenditure is hereby republished.

**(TO BE PUBLISHED IN THE GOVERNMENT OF INDIA**
**PART-I (SECTION-2)**
**No. F.No.1(5)2005-E-II(B) 746**
**Government of India**
**Ministry of Finance**
**Department of Expenditure**
**New Delhi:7.10.2005**
**OFFICE MEMORANDUM**

**Sub:** Payment of Dearness Allowance to Central Government employees - Revised Rates effective from 1.7.2005.

The undersigned is directed to refer to the Ministry's Office Memorandum No.1(1)/2005-E-II(B)/263 dated 31st March 2005 on the subject mentioned above and to state that the President is pleased to decide that the Dearness Allowance payable to Central Government employees shall be enhanced from the existing rate of 17% to 21% with effect from 1st July 2005.

2. The provisions contained in paras 3,4 and 5 of this Ministry's O.M.No. 1(13)/97-E-II (B) dated 3.10.1997 shall continue to be applicable while regulating Dearness Allowance under these orders. However, with effect from 1.4.2004. Dearness Allowance is computed on the basis of Basic Pay, Dearness Pay, Stagnation Increment and NPA. Provisions contained in para 3 of this Ministry' SOM No. 1(13)97-E II(B) dated 3.10.1997 therefore stand amended to this extent.

3. The additional installment of Dearness Allowance payable under these orders shall be paid in cash to all Central Government employees.

4. These orders shall also apply to the civilian employees paid from the Defence Services Estimates and the expenditure will be chargeable to the relevant head of the Defence Services Estimates. In regard to Armed Forces Personnel and railway employees separate orders will be issued by the Ministry of Defence and Ministry of Railways, respectively.

5. In so far as the persons serving in the Indian Audit and Accounts Department are concerned. these orders issued after consultation with the Comptroller and Auditor General of India.

**N.P. SINGH**
Under Secretary to the Government of India

By Order and in the name of the Governor of Karnataka,
**K. SUDHAKARA SHETTY**
Under Secretary to Government,
Department of Personnel & Administrative Reforms (Services-1)

P.R. 1506

**ಕಂದಾಯ ಸಚಿವಾಲಯ**

**ತಿದ್ದುಪಡಿ ಸಂ.ಕಂಇ 647 ಮುನೋಮು 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ಅಧಿಸೂಚನೆ ಸಂಖ್ಯೆ:ಕಂಇ 416 ಮುನೋಮು 2005 ದಿನಾಂಕ: 13.7.2005ರಲ್ಲಿನ ಅಧಿಸೂಚನೆಯ ಸಂಖ್ಯೆಯನ್ನು "ಕಂಇ 416 ಮುನೋಮು 2005"ರ ಬದಲಾಗಿ "ಕಂಇ 416 ಮುನೋಮು 2004" ಎಂದು ಓದಿಕೊಳ್ಳತಕ್ಕದ್ದು ಹಾಗೂ ಅಧಿಸೂಚನೆಯಲ್ಲಿ 3ನೇ ಸಾಲಿನಲ್ಲಿರುವ "ಕಲಬುರ್ಗಿ" ಎಂಬ ಪದಕ್ಕೆ ಬದಲಾಗಿ "ಕಣಬರ್ಗಿ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1509

## ಶಿಕ್ಷಣ ಸಚಿವಾಲಯ

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ:26.12.2003ರ ಸಂ. ಇಡಿ 386 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:1.9.2005 ಸಂ.F.SRO/NCTE/B.P.Ed/2005-06/ 2644ರ/ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ: 3.9.2005ರ ಸಂ.112/ವೈಎಂಸಿಎ/ಸಂಯೋಜನೆ/ಬಿ.ಪಿ.ಎಡ್/ 2005-06ರ ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಅಧ್ಯಕ್ಷರ ಪತ್ರ.
4. ದಿನಾಂಕ:24.11.2003ರ ಸಂ. ಎಸಿಎ-3 ಸಪಸ/ಹೊಕಾಪ್ರ/ಹೊಕೊಪ್ರ/2003-04ರ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:1.9.2005ರ ಆದೇಶದಲ್ಲಿ ಎನ್‌ಸಿಟಿಇಯು ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಅಧ್ಯಕ್ಷರು ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಆರ್‌ಸಿ 2005 (ಭಾಗ-2), ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ವೈ.ಎಂ.ಸಿ.ಎ. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಂದರ ರಾಜ ಗುಪ್ತ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 1517

**ವಿಷಯ:** ಬಿಜಾಪುರದಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣಕ್ಕಾಗಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಇಡಿ:161:ಯೋಯೋಕ 2005:ದಿ:28.5.2005.
(ಇಡಿ:25:ಸ್ವೀಮರ(ಯುನಿಕ್) 2005:ದಿ:28.5.2005)
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ:ಕಾ.ಶಿ.ಇ-12-ಯೋಜನೆ-2001-02/ ದಿ.27.8.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ:28.5.2005ರ ಸರ್ಕಾರೀ ಆದೇಶದಲ್ಲಿ 2005-06ನೇ ಸಾಲಿನ ಹೊಸ ಘಟಕ ಕಾರ್ಯಕ್ರಮದಡಿ ಬಿಜಾಪುರದಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣಕ್ಕಾಗಿ ಲೆಕ್ಕಶೀರ್ಷಿಕೆ:2202-03-103-2-02-059(ಪಿ.ವಿ)ರ ಯೋಜನೆಯಡಿಯಲ್ಲಿ ರೂ.80.00 ಲಕ್ಷಗಳನ್ನು (ರೂಪಾಯಿ ಎಂಭತ್ತು ಲಕ್ಷಗಳು ಮಾತ್ರ) ನಿಗದಿಪಡಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರದಲ್ಲಿ ಸದರಿ ಕಾಲೇಜು ಕಟ್ಟಡ ನಿರ್ಮಾಣಕ್ಕಾಗಿ ಜಿಲ್ಲಾಧಿಕಾರಿಗಳು 7.33 ಎಕರೆ ಜಮೀನನ್ನು ಮಂಜೂರು ಮಾಡಿದ್ದು, ಸದರಿ ಜಾಗವು ಇಲಾಖಾ ಸ್ವಾಧೀನದಲ್ಲಿದೆ ಎಂದು ತಿಳಿಸಿರುತ್ತಾರೆ. ಹೊಸ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕರ್ನಾಟಕ ಗೃಹ ಮಂಡಳಿಗೆ ವಹಿಸಲು ಉದ್ದೇಶಿಸಿದ್ದು. ಸದರಿ ಮಂಡಳಿಯವರು ಕಟ್ಟಡ ನಿರ್ಮಾಣಕ್ಕೆ ರೂ.100.00 ಲಕ್ಷಗಳ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು ಸಲ್ಲಿಸಿರುವುದಾಗಿ ತಿಳಿಸಿ, ಕೂಡಲೇ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:327:ಯೋಸಕ 2005:ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2005**
**(ಇಡಿ: 56 :ಸ್ವೀಮರ(ಯುನಿಕ್) 2005, ದಿನಾಂಕ:24ನೇ ಅಕ್ಟೋಬರ್ 2005)**

2005-06ನೇ ಸಾಲಿಗೆ ಹೊಸ ಘಟಕ ಕಾರ್ಯಕ್ರಮದಡಿ ಬಿಜಾಪುರದಲ್ಲಿ ನೂತನವಾಗಿ ಸ್ಥಾಪಿತವಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣದ ಅಂದಾಜು ವೆಚ್ಚ ರೂ.100.00 ಲಕ್ಷಗಳಿಗೆ (ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ) ಆಡಳಿತಾತ್ಮಕ ಅನುಮೋದನೆಯನ್ನು

ನೀಡಲಾಗಿದೆ. ಹಾಗೂ 2005-06ನೇ ಸಾಲಿಗೆ ಆಯವ್ಯಯದಲ್ಲಿ ನಿಗದಿಪಡಿಸಿರುವ ರೂ.80.00 ಲಕ್ಷಗಳನ್ನು (ರೂಪಾಯಿ ಎಂಭತ್ತು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಸದರಿ ಕಾಮಗಾರಿಯನ್ನು ನಿರ್ವಹಿಸಲು ಕರ್ನಾಟಕ ಗೃಹ ಮಂಡಳಿಗೆ ವಹಿಸಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 2000ದಲ್ಲಿ ನಿಗದಿಪಡಿಸಿರುವ ವಿಧಿವಿಧಾನಗಳನ್ನು ಪಾಲಿಸತಕ್ಕದ್ದು.

ಕಾಮಗಾರಿಗಳ ಗುಣಮಟ್ಟದ ಬಗ್ಗೆ ಪರಿಶೀಲಿಸಿ ಆರ್ಥಿಕ ಮತ್ತು ಭೌತಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ನೀಡತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಶಿ.ಇ:771:ಐ.ಎಫ್(ಬಿಎ)2005: ದಿನಾಂಕ:17.10.2005 ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್.ಡಿ:1:ಟಿ.ಎಫ್.ಸಿ96:ದಿನಾಂಕ:10.7.1996ರಲ್ಲಿ ಪ್ರಧಾನಕಾರ್ಯದರ್ಶಿ/ಕಾರ್ಯದರ್ಶಿರವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1518

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## COMMERCE AND INDUSTRIES SECRETARIAT

**Sub:** Transfer of Mining lease No.2482 held by Shri V.N.K. Menon in favour of M/s Marwa Mining Company.

**Read:** Letter No.DMG/MLS/05-TRN/2005/1302 dated 5.8.2005 of the Director, Department of Mines and Geology, Bangalore.

**Preamble:-**

The Director, Department of Mines and Geology in his letter read above has stated that Shri V.N.K. Menon is holding Mining lease No.2482 for Manganese ore over an area of 22.45 hectares in Jiginahalli village, Sandur taluk, Bellary district for a period of 20 years w.e.f., 6.7.2000. The lessee has requested to transfer the Mining lease No.2482 in favour of M/s Marwa Mining Company to develop the Mines on large scale basis and to exploit the mineral to the maximum extent with additional investment and machinery. M/s Marwa Mining Company have also agreed to take over the Mining lease on transfer as per Rule 37 of M.C. Rules 1980 subject to terms and conditions of the Mining lease. Since both the applicants have fulfilled all the requirements as per M.C. Rules, 1960, the Director of Mines and Geology has recommended to Government for transfer of Mining lease No.2482 held by Shri V.N.K.Menon in favour of M/s Marwa Mining Company as per Rule 37 of M.C. Rules, 1960. The proposal has been examined.

**Government Order No. CI.188:MMM.2005, Bangalore, Dated: 24th October 2005**

In the circumstances explained in the preamble, Government are pleased to accord sanction under Rule 37 of M.C.Rules, 1960 for transfer of Mining lease No.2482 held by Shri V.N.K.Menon in Jiginahalli village, Sandur taluk, Bellary district over an area of 22.45 hectares in favour of M/s Marwa Mining Company, Umer Manzil, Kudligi, Bellary.

By Order and in the name of the Governor of Karnataka,

P.R. 1520

**JAGADISH JOIS**
Under Secretary to Government (Mines)
Commerce & Industries Department.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲಾ ಗ್ಯಾಸೆಟಿಯರ್ (ಪರಿಷ್ಕೃತ) ಬಿಡಿ ಪ್ರತಿಯ ಮಾರಾಟ ಬೆಲೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಗ್ಯಾಇಸಿ(2)ಕೋಜಿಗ್ಯಾ: ಮುದ್ರಣ:2005-06/405 ದಿನಾಂಕ:19.9.2005 ಮತ್ತು 23.9.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 19.9.2005ರ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು ಕೋಲಾರ ಜಿಲ್ಲೆಯ ಗ್ಯಾಸೆಟಿಯರ್ (ಪರಿಷ್ಕೃತ) ಬಿಡಿ ಪ್ರತಿಯ ಮಾರಾಟ ಬೆಲೆ ನಿಗದಿಪಡಿಸುವ ಕುರಿತು ಪ್ರಸ್ತಾವನೆ ಸಲ್ಲಿಸಿದ್ದಾರೆ. ಗ್ಯಾಸೆಟಿಯರ್ ಇಲಾಖೆ ಈ ಸಂಪುಟದ 1000 (ಒಂದು ಸಾವಿರ ಮಾತ್ರ) ಪ್ರತಿಗಳನ್ನು ಮುದ್ರಿಸಿದ್ದು ಬಿಡುಗಡೆಗೆ ಸಿದ್ಧವಿದೆ ಪುಸ್ತಕ ಬಿಡುಗಡೆ ವೇಳೆಗೆ ಬಿಡಿ ಪ್ರತಿಯ ಮಾರಾಟ ಬೆಲೆ ನಿಗದಿಪಡಿಸಿದ್ದರೆ ಪುಸ್ತಕಗಳ ಮಾರಾಟಕ್ಕೆ ಅನುಕೂಲವಾಗುವುದು. ಆದ್ದರಿಂದ ಕೋಲಾರ ಸಂಪುಟಕ್ಕೆ ಗ್ಯಾಸೆಟಿಯರ್ ಇಲಾಖೆ ಒಟ್ಟು ರೂ.2,80,000/- ವೆಚ್ಚ ಮಾಡಿದ್ದು, ಇದರಲ್ಲಿ ಕಾಗದ ಖರೀದಿ ವೆಚ್ಚ, ಮುದ್ರಣ ವೆಚ್ಚ, ಮ್ಯಾಪ್ ತಯಾರಿಕೆ ವೆಚ್ಚ ಸೇರಿವೆಯೆಂದು ತಿಳಿಸಿದ್ದಾರೆ. ಪ್ರಸ್ತಾವನೆಯನ್ನು ಸರ್ಕಾರಿ ಮುದ್ರಣಾಲಯದ ಸೂತ್ರದಂತೆ ಲಾಭ ನಷ್ಟವಿಲ್ಲದೆ ಆಧಾರದ ಮೇಲೆ ಲೆಕ್ಕ ಹಾಕಿ ಕಳುಹಿಸಿ ಬಿಡಿ ಪ್ರತಿಯ ಮಾರಾಟ ಬೆಲೆಯನ್ನು ರೂ.280/-ರಂತೆ ನಿಗದಿಪಡಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 25 ಕರಾಗೆ 2005, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆಯ ಗ್ಯಾಸೆಟಿಯರ್ (ಪರಿಷ್ಕೃತ) ಬಿಡಿ ಪ್ರತಿಯ ಮಾರಾಟ ಬೆಲೆಯನ್ನು ರೂ.280/- (ರೂಪಾಯಿ ಎರಡು ನೂರ ಎಂಭತ್ತು ಮಾತ್ರ)ಕ್ಕೆ ಸರ್ಕಾರ ನಿಗದಿಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಶಿಇ 781 ಐಎಫ್ (ಬಿಎ) 2005 ದಿನಾಂಕ ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್. 1521

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕಾರ್ಮಿಕ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕಾಇ:62:ಇಟಿಐ 2005, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2005**

ದಿನಾಂಕ: 3.9.2005ರ ಆದೇಶ ಸಂಖ್ಯೆ: ಕಾಇ 62 ಇಟಿಎಕ್ಸ್ 2004ಕ್ಕೆ ಲಗತ್ತಿಸಿರುವ ಅನುಬಂಧದ ಕ್ರಮ ಸಂಖ್ಯೆ 2 ಮತ್ತು 3ನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿದ್ದು, ಅದರಂತೆ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಜಿಲ್ಲೆ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಹೆಸರು | ಅನುದಾನಿತ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಹೆಸರು | ನೋಡಲ್ ಅಧಿಕಾರಿ |
|---|---|---|---|---|
| 2 | ಬಾಗಲಕೋಟೆ | | ಬನಶಂಕರಿ ಗ್ರಾಮಾಂತರ ಐ.ಟಿ.ಸಿ. ಬನಶಂಕರಿ ಬಾದಾಮಿ ತಾಲ್ಲೂಕು ಬಾಗಲಕೋಟೆ ಜಿಲ್ಲೆ. | ಪ್ರಾಂಶುಪಾಲರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಾಗಲಕೋಟೆ. |
| 3 | ಬಿಜಾಪುರ | 1. ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಬಲೇಶ್ವರ್ | - | ಪ್ರಾಂಶುಪಾಲರು, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಿಜಾಪುರ |
| | | 2. ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ನಾಲತ್‌ವಾಡ್ | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1524

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಎಸ್.ಯು.ಐ.ಎಸ್. ಸ್ಟ್ಯಾಂಡರ್ಡ್ ಡಾಕ್ಯೂಮೆಂಟ್ ಅಂತಿಮಗೊಳಿಸಲು ಡಿ.ಸಿ.ಪಿ.ಓ. ನವದೆಹಲಿಯಲ್ಲಿ ದಿ:28 ಮತ್ತು 29ನೇ ಸೆಪ್ಟೆಂಬರ್ 2005ರಂದು ನಡೆಯಲಿರುವ ಸಭೆಗೆ ಹಾಜರಾಗಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ:**
1. ಕಡತ ಸಂಖ್ಯೆ:ನಯೋ.ಸಿ(2):ಎಸ್‌ಯುಐಎಸ್.2005 ದಿನಾಂಕ:15.9.05 ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು.
2. ದಿನಾಂಕ:4.5.2005ರ ಪತ್ರಸಂಖ್ಯೆ:2.11.2004.ಟಿಸಿಪಿಓ.ಎಸ್‌ಯುಐಎಸ್.ಯುಆರ್‌ಪಿಎಸ್. ನಗರ ಮತ್ತು ಗ್ರಾಮಾಂತರ ಯೋಜಕ, ನವದೆಹಲಿ ಇವರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ಎಸ್.ಯು.ಐ.ಎಸ್. ಸ್ಟ್ಯಾಂಡರ್ಡ್ ಡಾಕ್ಯೂಮೆಂಟ್ ಅಂತಿಮಗೊಳಿಸಲು ಡಿ.ಸಿ.ಪಿ.ಓ. ಸಭೆಯು ದಿನಾಂಕ:28, 29 ಸೆಪ್ಟೆಂಬರ್ 2005ರಂದು ನವದೆಹಲಿಯಲ್ಲಿ ನಡೆದಿದ್ದು, ನಗರ ಯೋಜನಾ ನಿರ್ದೇಶಕರು ಸಮಿತಿಯ ಸದಸ್ಯರಾಗಿರುವುದರಿಂದ ಮೇಲ್ಕಂಡ ಸಭೆಗೆ ಹಾಜರಾಗಿರುತ್ತಾರೆ ಹಾಗೂ ಸಭೆಯಲ್ಲಿ ಭಾಗವಹಿಸಿರುವುದಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ.131.ನಯೋಸೇ.2005, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2005**

ಶ್ರೀ ವಿ.ಎಂ. ಹೆಗಡೆ, ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ದಿನಾಂಕ: 28 ಮತ್ತು 29 ಸೆಪ್ಟೆಂಬರ್ 05 ರಂದು ನವದೆಹಲಿಯಲ್ಲಿ ನಡೆದ ಎಸ್.ಯು.ಐ.ಎಸ್. ಸ್ಟ್ಯಾಂಡರ್ಡ್ ಡಾಕ್ಯೂಮೆಂಟ್ ಡಿ.ಸಿ.ಪಿ.ಓ. ಸಭೆಯಲ್ಲಿ ಭಾಗವಹಿಸಿ ಹಿಂದಿರುಗಿರುವ ಕ್ರಮಕ್ಕೆ ಸರ್ಕಾರವು ಘಟನೋತ್ತರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 1528

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಕಂಇ 107 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 107 ಎಲ್‌ಆರ್‌ಎಂ 2005 ದಿನಾಂಕ 29.8.2005 ರಲ್ಲಿ "ಶ್ರೀ ಗುರು ಕೊಟ್ಟಪ್ಪಾಜಿ ಗದ್ದಿಗೆ ಟ್ರಸ್ಟ್" ಎಂಬುದರ ಬದಲಿಗೆ "ಶ್ರೀ ಗುರು ಕೊಟ್ರಪ್ಪಜ್ಜ ಗದ್ದಿಗೆಯ ಟ್ರಸ್ಟ್ (ರಿ)" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು ಹಾಗೂ ಅಧಿಸೂಚನೆಯ ಷರತ್ತಿನ ಕ್ರಮ ಸಂಖ್ಯೆ 8ನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1530

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸುಧಾರಣೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜಿನ ನೇತ್ರ ಚಿಕಿತ್ಸಾ ಶಾಸ್ತ್ರ, ಉಪನ್ಯಾಸಕ ಡಾ: ಆರ್.ಎಸ್. ಪಾಟೀಲ್ ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:**

1. ದಿನಾಂಕ:18.11.86, ಸಂಖ್ಯೆ: ವಶ್ರೇಲ(3)/78/85-86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
2. ದಿನಾಂಕ:31.05.85, ಸಂಖ್ಯೆ: ಎಸ್‌ಆರ್‌ಓ(1)/10/85-86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆ.
3. ದಿನಾಂಕ: 24/26-3-88, ಸಂಖ್ಯೆ: ಆಕುಕ 112 ಎಂಸಿಎಲ್ 85ರ ನೋಟೀಸ್.
4. ದಿನಾಂಕ: 17.01.91ರ ಕನ್ನಡಪ್ರಭದಲ್ಲಿ ಪ್ರಕಟಿಸಿದ 24/26.3.88, ಸಂಖ್ಯೆ: ಆಕುಕ 112 ಎಂಸಿಎಲ್ 85ರ ನೋಟೀಸು ಮತ್ತು ಅದರ ನಾಲ್ಕು ಅನುಬಂಧಗಳು.
5. ತಾ:8.9.93, ಸಂಖ್ಯೆ: ಆಕುಕ 112 ಎಂಸಿಎಲ್ 85ರ ಸರ್ಕಾರಿ ಆದೇಶ.
6. ತಾ:8.9.93, ಸಂಖ್ಯೆ: ಆಕುಕ 112 ಎಂಸಿಎಲ್ 85ರ ನೋಟೀಸು.
7. ತಾ:19.10.95 ರ ಕನ್ನಡ ಪ್ರಭದಲ್ಲಿ ಪ್ರಕಟಿಸಿದ ಪ್ರಕಟಣೆ
8. ತಾ:24.5.97, ಸಂಖ್ಯೆ: ಆಕುಕ 112 ಎಂಸಿಎಲ್ 85ರ ಸರ್ಕಾರಿ ಆದೇಶ.
9. ತಾ:4.2.2000, ಸಂಖ್ಯೆ: ಆಕುಕ 112 ಎಂಸಿಎಲ್ 85ರ ಸರ್ಕಾರಿ ಆದೇಶ.
10. ತಾ:14.5.2001 ರ ನಿವೃತ್ತ ಜಿಲ್ಲಾ ನ್ಯಾಯಾಧೀಶ ಮತ್ತು ವಿಚಾರಣಾಧಿಕಾರಿ ಶ್ರೀ ಎಸ್.ವಿ. ತಿಲಗುಲ್‌ರವರ ಪತ್ರ.
11. ತಾ:31.3.2000 ದ "ಕನ್ನಡ ಪ್ರಭ" ಹಾಗೂ "ಸಂಯುಕ್ತ ಕರ್ನಾಟಕ" ದಲ್ಲಿ ಪ್ರಕಟಿಸಿದ ಸಂಖ್ಯೆ: ಡಿಜಿ(ನಿ) ಇಎನ್‌ಕ್ಯೂ/15/99-2000 ದ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಅಧಿಸೂಚನೆ.
12. ತಾ:31.8.2001, ಸಂಖ್ಯೆ: ಪಿಎಸ್‌ಸಿ. 39/ಸಿಎನ್‌ಎಸ್ 2001ರ ಕರ್ನಾಟಕ ಲೋಕ ಸೇವಾ ಆಯೋಗದ ಕಾರ್ಯದರ್ಶಿಯವರ ಪತ್ರ.
13. ತಾ: 17.4.2004 ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿದ ತಾ: 15.3.2004, ಸಂಖ್ಯೆ: ಆಕುಕ 7 ಎಂಸಿಎಲ್ 2004ರ ಅಧಿಸೂಚನೆ.

**ಪೀಠಿಕೆ:**

1. ಬೆಂಗಳೂರು ವೈದ್ಯಕೀಯ ಕಾಲೇಜಿನ ನೇತ್ರ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರಾಗಿದ್ದ ಡಾ:ಆರ್.ಎಸ್. ಪಾಟೀಲ್‌ರವರು ದಿನಾಂಕ: 27.10.84 ರಿಂದ ದಿನಾಂಕ: 23.2.85ರ ವರೆಗೆ 120 ದಿನಗಳ ರಜೆಗೆ ಅರ್ಜಿ ಸಲ್ಲಿಸಿ ಅದನ್ನು ಮಂಜೂರು ಮಾಡಿಸಿಕೊಳ್ಳದೆ ರಜೆ ಮೇಲೆ ತೆರಳಿದ್ದರು. ರಜೆ ಅವಧಿ ಅಂತ್ಯಗೊಂಡ ನಂತರವು ಕರ್ತವ್ಯಕ್ಕೆ ಹಿಂತಿರುಗದೆ ಅನಧಿಕೃತ ಗೈರು ಹಾಜರಾಗಿದ್ದರು. ದಿನಾಂಕ:13.3.85 ರಂದು ಅವರಿಗೆ ನೀಡಲಾಗಿದ್ದ Recall ನೋಟೀಸು "Party Left" ಎಂಬ ಹಿಂಬರಹದೊಂದಿಗೆ ಹಿಂತಿರುಗಿತ್ತು. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ (ಕೆಸಿಎಸ್‌ಆರ್‌ಎಸ್) 108ನೇ ನಿಯಮದಡಿ ಯಾವುದೇ ಸರ್ಕಾರಿ ನೌಕರರು 4 ತಿಂಗಳ ಅವಧಿಗೆ ಮೀರಿ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕುವ ಅಥವಾ ವಜಾ ಮಾಡುವ ದಂಡನೆಯನ್ನು 1957ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿ ವಿಧಿಸಬಹುದಾಗಿರುತ್ತದೆ. ಅದರಂತೆ, ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವ ಹಿನ್ನೆಲೆಯಲ್ಲಿ ದಿನಾಂಕ: 24/26.3.88ರ ಕಾರಣ ಕೇಳುವ ಸೂಚನೆಯನ್ನು 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11ನೇ ನಿಯಮದಡಿ ನೀಡಲಾಗಿತ್ತು. 15 ದಿನಗಳಲ್ಲಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು. ಈ ಮಧ್ಯೆ ದಿನಾಂಕ: 31.5.85ರ ಅಧಿಸೂಚನೆಯಲ್ಲಿ ಅವರನ್ನು ಬಳ್ಳಾರಿಯ ಸರ್ಕಾರಿ ವೈದ್ಯಕೀಯ ಕಾಲೇಜಿಗೆ ವರ್ಗಾಯಿಸಲಾಗಿತ್ತು. ಆದರೆ ಅವರು ಅದಕ್ಕೆ ಸ್ಪಂದಿಸಿರಲಿಲ್ಲ. ಮೇಲ್ಕಂಡ ನೋಟೀಸು ಅವರಿಗೆ ಜಾರಿಯಾಗದ ಕಾರಣ ಅದನ್ನು ಅನುಬಂಧಗಳೊಂದಿಗೆ ದಿನಾಂಕ: 17.1.91 ರ ಕನ್ನಡ ಪ್ರಭದಲ್ಲಿ ಪ್ರಕಟಿಸಲಾಗಿತ್ತು. ಅದಕ್ಕೂ ಅವರು ಪ್ರತಿಕ್ರಿಯಿಸಿರಲಿಲ್ಲ. ಏತನ್ಮಧ್ಯೆ ಕೆಲವು ತಾಂತ್ರಿಕ ದೋಷಗಳ ಹಿನ್ನೆಲೆಯಲ್ಲಿ ತಾ:8.9.93ರ ಸರ್ಕಾರಿ ಆದೇಶದಲ್ಲಿ ಅವರಿಗೆ ನೀಡಲಾಗಿದ್ದ ನೋಟೀಸನ್ನು ಹಿಂತೆಗೆದುಕೊಂಡು ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಕ್ಕನ್ನು ಕಾಯ್ದಿರಿಸಿಕೊಳ್ಳಬೇಕು. ಅದರಂತೆ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ತಾ: 8.9.93ರ ಸೂಚನೆಯನ್ನು ನೀಡಲಾಗಿತ್ತು. ಮತ್ತೊಂದು ಅವಕಾಶ ನೀಡುವ ಸಲುವಾಗಿ ದಿನಾಂಕ: 19.10.95 ರ "ಕನ್ನಡ ಪ್ರಭ" ದಲ್ಲಿ ಒಂದು ಪ್ರಕಟಣೆಯನ್ನು ನೀಡಿ 15 ದಿನಗಳಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅವರಿಗೆ ನಿರ್ದಿಷ್ಟ ಸೂಚನೆಯನ್ನು ನೀಡಲಾಗಿತ್ತು. ಅವರು ಯಾವುದಕ್ಕೂ ಪ್ರತಿಕ್ರಿಯಿಸದ ಕಾರಣ ದಿನಾಂಕ: 25.5.97ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರವನ್ನು ಮತ್ತು ಮಂಡನಾಧಿಕಾರಿರವರನ್ನು ನೇಮಿಸಲಾಗಿತ್ತು.

2. ದಿನಾಂಕ: 24.5.97ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎಸ್.ವಿ. ತಿಲುಗುಲ್‌ರವರನ್ನು ವಿಚಾರಣಾ ಪ್ರಾಧಿಕಾರವಾಗಿ ನೇಮಿಸಲಾಗಿತ್ತು. ದಿನಾಂಕ: 11.5.2001ರ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆ ಸಾಬೀತಾಗಿದೆ ಎಂಬ findings ನೊಂದಿಗೆ ವಿಚಾರಣಾ ವರದಿಯನ್ನು ನೀಡಿದ್ದರು. ಅವರಿಗೆ 2ನೇ ಕಾರಣ ಕೇಳುವ ಸೂಚನೆಯನ್ನು ಜಾರಿ ಮಾಡಿರಲಿಲ್ಲ.

3. ಕೆ.ಸಿ.ಎಸ್.ಆರ್.ಎಸ್.ನ 108ನೇ ನಿಯಮದಡಿ ಓದಲಾದ ತಾ: 14.9.2001 ಸಂಖ್ಯೆ: ಸಿಆಸುಇ 18 ಸೇಇವಿ 2001ರ ಸುತ್ತೋಲೆಯನ್ನು ಉದ್ಧರಿಸಿ 1957ರ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಯ 8 (viii)ನೇ ನಿಯಮದಡಿ ಆಪಾದಿತರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ನಿರ್ಧರಿಸಲಾಯಿತು. ಅದರಂತೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆಯಲಾಯಿತು.

4. ಆಪಾದಿತರಿಗೆ ಮತ್ತೊಂದು ಅವಕಾಶವನ್ನು ನೀಡುವುದು ಸಮುಚಿತವೆಂದು ಪರಿಗಣಿಸಿದ ಸರ್ಕಾರವು ತಾ:15.3.2004 ಸಂಖ್ಯೆ: ಆಕುಕ 7 ಎಂಸಿಎಲ್ 2004ರ ಅಧಿಸೂಚನೆಯನ್ನು ತಾ: 17.4.2004ರ ಪ್ರಜಾವಾಣಿ ಮತ್ತು ವಿಜಯ ಕರ್ನಾಟಕದಲ್ಲಿ ಪ್ರಕಟಿಸಿ 15 ದಿನಗಳ ಅವಧಿಯಲ್ಲಿ ಸರ್ಕಾರವನ್ನು ಸಂಪರ್ಕಿಸಿ 2ನೇ ಕಾರಣ ಕೇಳುವ ಶೋಕಾಸ್ ನೋಟೀಸನ್ನು ಪಡೆದು ಉತ್ತರಗಳನ್ನು ಸಲ್ಲಿಸಲು ಸೂಚಿಸಿ ಈ ಸದಾವಕಾಶವನ್ನು ಉಪಯೋಗಿಸಿಕೊಳ್ಳದಿದ್ದಲ್ಲಿ ಅದರಂತೆ ಪರಿಭಾವಿಸಿ ಆಪಾದಿತರ ವಿರುದ್ಧ ಸಾಬೀತಾಗಿರುವ ದೋಷಾರೋಪಣೆಯ ಸ್ವರೂಪ ಮತ್ತು ತೀವ್ರತೆಗೆ ತಕ್ಕಂತಹ ದಂಡನೆಯನ್ನು ವಿಧಿಸಲಾಗುವುದು ಎಂದು ಸುಸ್ಪಷ್ಟವಾಗಿ ನಮೂದಿಸಲಾಗಿತ್ತು. ಆಪಾದಿತರು ಅದಕ್ಕೂ ಪ್ರತಿಕ್ರಿಯಿಸಿಲ್ಲ. ಆದ್ದರಿಂದ ಮೇಲ್ಕಂಡ ಸರ್ಕಾರದ ತಾತ್ವಿಕ ನಿರ್ಧಾರದಂತೆ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 87 ಎಂಸಿಎಲ್ 2004, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2005**

5. ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ನೇತ್ರ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರಾಗಿದ್ದು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಹಾಗೂ ಬಳ್ಳಾರಿಯ ಅಂದಿನ ಸರ್ಕಾರಿ ವೈದ್ಯಕೀಯ ಕಾಲೇಜಿಗೆ (ಈಗ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ) ವರ್ಗಾವಣೆಯ ಆದೇಶದಲ್ಲಿದ್ದ ಡಾ: ಆರ್.ಎಸ್. ಪಾಟೀಲ್ ರವರ ಮೇಲೆ 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 8 (viii)ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

6. ಬೆಂಗಳೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಡಾ: ಆರ್.ಎಸ್. ಪಾಟೀಲ್‌ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ಮಹಾಲೇಖಪಾಲರಿಗೆ (ಎ ಅಂಡ್ ಇ) ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 1531

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

**ವಿಷಯ:** ಡಾ: ಬಿ.ಎಂ. ಮಹೇಶ್ವರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂ: ಡಿಪಿಜಿ (1) ಬೆಂನ : 96 : 2003-04 ದಿನಾಂಕ: 1/2.3.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯಲ್ಲಿ ಡಾ: ಬಿ.ಎಂ. ಮಹೇಶ್ವರಪ್ಪ, ಇವರು ದಿನಾಂಕ: 20.6.1981 ರಿಂದ ವೈದ್ಯಾಧಿಕಾರಿಯಾಗಿ ನೇಮಕಗೊಂಡು ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇಲ್ಲಿ ವಿಮಾ ವೈದ್ಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಅಂದಿನ ಸಮಾಜ ಕಲ್ಯಾಣ ಮತ್ತು ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯುಎಸ್ 441 ಎಸ್‌ಎಸ್‌ಐ 87 ದಿನಾಂಕ: 22.8.1990 ರಲ್ಲಿ ಇವರ ಸೇವೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಮಾತೃ ಇಲಾಖೆಯಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಗೆ ಹಿಂತಿರುಗಿಸಲಾಗಿದೆ. ಸದರಿ ವೈದ್ಯರು ದಿನಾಂಕ: 5.7.86 ರಿಂದ 2.9.86 ರವರೆವಿಗೆ 60 ದಿನಗಳ ಗಳಿಕೆ ರಜೆಯ ಮೇಲೆ ತೆರಳಿ ರಜೆ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೇ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರ ಖಾಯಂ ಪೂರ್ವ ಸೇವಾವಧಿಯನ್ನು ಇನ್ನೂ ಘೋಷಿಸಿಲ್ಲವಾದ್ದರಿಂದ ಖಾಯಂಪೂರ್ವ ಸೇವಾವಧಿಯಲ್ಲಿಯೇ ದೀರ್ಘಕಾಲದ ಅನಧಿಕೃತ ಗೈರುಹಾಜರಿಯಲ್ಲಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪ ನಿಯಮ 6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 676 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಬಿ.ಎಂ. ಮಹೇಶ್ವರಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ದಿನಾಂಕ: 5.7.1986 ರಿಂದ 2.9.1986 ರವರೆಗೆ 60 ದಿನಗಳ ಗಳಿಕೆ ರಜೆಯ ಮೇಲೆ ತೆರಳಿ ರಜೆ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೇ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 3.9.1986 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1532

**ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆಯಲ್ಲಿ ಸೃಜಿಸಲಾಗಿರುವ ಹೆಚ್ಚುವರಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 96 ದಿನಾಂಕ: 20.9.1996.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 96 ದಿನಾಂಕ: 20.3.2002.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 91 ಸಸಿವಿ 2003 ದಿನಾಂಕ: 29.12.2003.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2004 ದಿನಾಂಕ: 9.11.2004.
5. ಅನಧಿಕೃತ ಟಿಪ್ಪಣಿ ಸಂಖ್ಯೆ: ಮುಅಇ 154 ಮುಇವಿ 2003 ದಿನಾಂಕ: 1.10.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 20.9.1996ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆ ಎಂಬ ಹೊಸ ಇಲಾಖೆಯನ್ನು ಸೃಜಿಸಲಾಗಿರುತ್ತದೆ. ನಂತರ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ದಿನಾಂಕ: 20.3.2002ರ ಸರ್ಕಾರದ ಆದೇಶದಲ್ಲಿ ಈ ಇಲಾಖೆಯಲ್ಲಿ ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ದಿನಾಂಕ: 19.9.2002 ರವರೆಗೆ ಸೃಜಿಸಲಾಗಿರುತ್ತದೆ.

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ ರೂ. | ಹುದ್ದೆಗಳ ಸಂಖ್ಯೆ |
|---|---|---|---|
| 1. | ನಿರ್ದೇಶಕರು | 12800-16720 | 01 |
| 2. | ಸಹಾಯಕ ನಿರ್ದೇಶಕರು<br>ಅ) ಪ್ರಾಜೆಕ್ಟ್ ಮಾನಿಟರ್ ಮತ್ತು ಎವಾಲ್ಯುಯೇಷನ್<br>ಆ) ಇನ್‌ವೆಸ್ಟರ್ಸ್ ಗೈಡೆನ್ಸ್ | 7400-13120 | 02 |
| 3. | ಸೀನಿಯರ್ ಪ್ರೋಗ್ರಾಮರ್ | 7400-13120 | 01 |
| 4. | ಜೂನಿಯರ್ ಪ್ರೋಗ್ರಾಮರ್ | 6000-11200 | 02 |
| 5. | ಆಪ್ತ ಸಹಾಯಕರು (ಶೀಘ್ರಲಿಪಿಗಾರರು ಹಾಗೂ ಇತರ ಪೂರಕ ಸಿಬ್ಬಂದಿ) | 4150-7800 | 03 |
| 6. | ಚಾಲಕ | 3000-5450 | 01 |

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ದಿನಾಂಕ: 9.11.2004ರ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 19.9.2005 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 20.9.2005 ರಿಂದ ಒಂದು ವರ್ಷದವರೆಗೆ ಮುಂದುವರೆಸಲು ಇಲಾಖೆಯು ಪ್ರಸ್ತಾಪಿಸಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸಸಿವಿ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆಯಲ್ಲಿ ಸೃಜಿಸಲಾಗಿರುವ ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ದಿನಾಂಕ: 20.9.2005 ರಿಂದ 19.9.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ ರೂ. | ಹುದ್ದೆಗಳ ಸಂಖ್ಯೆ |
|---|---|---|---|
| 1. | ನಿರ್ದೇಶಕರು | 12800-16720 | 01 |
| 2. | ಸಹಾಯಕ ನಿರ್ದೇಶಕರು<br>ಅ) ಪ್ರಾಜೆಕ್ಟ್ ಮಾನಿಟರ್ ಮತ್ತು ಎವಾಲ್ಯುಯೇಷನ್<br>ಆ) ಇನ್‌ವೆಸ್ಟರ್ಸ್ ಗೈಡೆನ್ಸ್ | 7400-13120 | 02 |
| 3. | ಸೀನಿಯರ್ ಪ್ರೋಗ್ರಾಮರ್ | 7400-13120 | 01 |
| 4. | ಜೂನಿಯರ್ ಪ್ರೋಗ್ರಾಮರ್ | 6000-11200 | 02 |
| 5. | ಆಪ್ತ ಸಹಾಯಕರು (ಶೀಘ್ರಲಿಪಿಗಾರರು ಹಾಗೂ ಇತರ ಪೂರಕ ಸಿಬ್ಬಂದಿ) | 4150-7800 | 03 |
| 6. | ಚಾಲಕ | 3000-5450 | 01 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1533

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ ಐಎಎಸ್ ಐವಿಬಿ 463-64 ದಿನಾಂಕ: 28.9.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮಹಾಲೇಖಪಾಲರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 52 ಸಸಿವಿ 2004, ದಿನಾಂಕ: 17.7.2004ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿನ ನಿರ್ಮಿಕರಿಸಿದ ಪ್ರಧಾನ ಕಾರ್ಯದರ್ಶಿಯವರ ಹುದ್ದೆಯ ಅವಧಿಯು ದಿನಾಂಕ: 30.6.2005ರಂದು ಕೊನೆಗೊಂಡಿರುವುದರಿಂದ ಆ ಅವಧಿಯನ್ನು ಮುಂದುವರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 65 ಸಸಿವಿ 2005, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ನಿರ್ಮಿಕರಿಸಿದ ಪ್ರಧಾನ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿಯನ್ನು ದಿನಾಂಕ: 1.7.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1534

